# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ನವೆಂಬರ್ ೨೨, ೨೦೧೨ (ಮಾರ್ಗಶಿರ ೧, ಶಕ ವರ್ಷ ೧೯೩೪) | ಸಂಚಿಕೆ ೪೬ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:–** ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯ ಅನುಷ್ಠಾನಕ್ಕಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕೆಲವು ಹುದ್ದೆಗಳನ್ನು ಮರುವಿನ್ಯಾಸಗೊಳಿಸಿ ಸ್ಥಳಾಂತರಿಸುವ ಮತ್ತು ಹೊಸದಾಗಿ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಕುಕ 34 ಹೆಚ್‌ಎಸ್‌ಎಂ 2008, ದಿನಾಂಕ: 16.02.2008.

2. ಸರ್ಕಾರದ ಆದೇಶ ಸಂಖ್ಯೆ: ಆಕುಕ 31 ಎಫ್‌ಪಿಆರ್ 2011, ದಿನಾಂಕ: 03.02.2011.
3. ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 70 (iii) ಸಿಜಿಇ 10, ದಿನಾಂಕ: 30.07.2011.
4. ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 70 (i) (ii) (iv) (v) ಸಿಜಿಇ 10, ದಿನಾಂಕ: 30.07.2011.
5. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಾ ಆ ಸಂ/ಆಸುಗುಕಾ/01/11–12, ದಿನಾಂಕ: – .11.2011 ಮತ್ತು 09.03.2012.
6. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 643 ವೆಚ್ಚ, 5/2012, ದಿನಾಂಕ: 31.07.2012.

**ಪ್ರಸ್ತಾವನೆ:–**

ಆಹಾರ ಕಲಬೆರಕೆ ತಡೆ ಕಾಯ್ದೆ 1954 ಹಾಗೂ ಅದರಡಿ ರಚಿಸಲಾಗಿರುವ ನಿಯಮಗಳ ಪ್ರಕಾರ ರಾಜ್ಯದಲ್ಲಿ ಆಹಾರ ಕಲಬೆರಕೆ ಆಗುವುದನ್ನು ತಡೆಗಟ್ಟುವ ಕಾರ್ಯಕ್ರಮಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮುಖಾಂತರ ಜಾರಿಗೊಳಿಸಲು ಅವಶ್ಯಕವಾಗಿದ್ದು, ಕಿರಿಯ ಆಹಾರ ಪರಿವೀಕ್ಷಕರು, ಹಿರಿಯ ಆಹಾರ ಪರಿವೀಕ್ಷಕರು ಮತ್ತು ಪತ್ರಾಂಕಿತ ಆಹಾರ ಪರಿವೀಕ್ಷಕರುಗಳ ಹುದ್ದೆಗಳನ್ನು ಮೇಲೆ ಕ್ರಮಾಂಕ (1) ರಲ್ಲಿನ ಸರ್ಕಾರಿ ಆದೇಶ ದಿನಾಂಕ: 16.02.2008ರಲ್ಲಿ ಹೊಸದಾಗಿ ಸೃಜಿಸಲಾಗಿತ್ತು. ತದನಂತರ, ಆಹಾರ ಪದಾರ್ಥಗಳ ತಯಾರಿಕೆ, ದಾಸ್ತಾನು ಸಂಗ್ರಹ, ಹಂಚಿಕೆ, ಮಾರಾಟ ಮತ್ತು ಆಮದು ಇವುಗಳ ಸುರಕ್ಷತೆ ಮತ್ತು ಗುಣಮಟ್ಟಗಳನ್ನು ಕಾನೂನಿನ ಅಡಿಯಲ್ಲಿ ಕ್ರಮಬದ್ಧಗೊಳಿಸಲು ಕೇಂದ್ರ ಸರ್ಕಾರವು ಆಹಾರ ಕಲಬೆರಕೆ ತಡೆಕಾಯ್ದೆ 1954 ನ್ನು ನಿರಶನಗೊಳಿಸಿ, ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ, 2006ನ್ನು ಜಾರಿಗೆ ತಂದಿರುತ್ತದೆ. ಈ ಕಾಯ್ದೆಗೆ ಅನುಗುಣವಾಗಿ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ನಿಯಮಗಳು, 2011ನ್ನು ದಿನಾಂಕ 05.08.2011 ರಂದು ಜಾರಿಗೆ ತರಲಾಗಿದೆ. ಈ ನಿಮಯಗಳಲ್ಲಿ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯನ್ನು ಜಾರಿಗೊಳಿಸುವ ಕಾರ್ಯ ವಿಧಾನವನ್ನು ಅಳವಡಿಸಿ, ಆಹಾರ ಸುರಕ್ಷತೆಯ ಉದ್ದೇಶ ಮತ್ತು ಗುರಿಯನ್ನು ಸಾಧಿಸಲು ಹಿರಿಯ ಕಾರ್ಯದರ್ಶಿ ವೃಂದದ ಅಧಿಕಾರಿಯ ನೇತೃತ್ವದಲ್ಲಿ ಒಂದು ಪ್ರತ್ಯೇಕ ಇಲಾಖೆಯನ್ನು ರಚಿಸಿ, ಅದಕ್ಕೆ ಸಂಬಂಧಿಸಿದಂತೆ ಕೆಲವೊಂದು ಪ್ರಮುಖ ಹುದ್ದೆಗಳನ್ನು ಸೃಜಿಸಲು ತಿಳಿಸಿದೆ.

ಈ ಕಾಯ್ದೆಯನ್ನು ರಾಜ್ಯದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮುಖಾಂತರ ಜಾರಿಗೊಳಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರನ್ನು 'ಆಯುಕ್ತರು ಆಹಾರ ಸುರಕ್ಷತೆ, ಕರ್ನಾಟಕ', ಎಂದು ಮೇಲೆ ಓದಲಾದ ಕ್ರಮಾಂಕ (2) ರಲ್ಲಿನ

ಸರ್ಕಾರಿ ಆದೇಶದಲ್ಲಿ ನೇಮಕ ಮಾಡಲಾಗಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಆಹಾರ ಪ್ರಯೋಗಾಲಯಗಳನ್ನು ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯ ಸೆಕ್ಷನ್ 43ರ ಅನ್ವಯ 'ಆಹಾರ ಪ್ರಯೋಗಾಲಯ' ಎಂದು ನಿಗಧಿಪಡಿಸಿ, ಅವುಗಳ ಕಾರ್ಯ ವ್ಯಾಪ್ತಿ ಪ್ರದೇಶಗಳನ್ನು ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರದ ಅಧಿಸೂಚನೆ ದಿನಾಂಕ: 30.07.2011 ರಲ್ಲಿ ಅಧಿಸೂಚಿಸಲಾಗಿದೆ. ಇದರ ಜೊತೆಗೆ ಈ ಕಾಯ್ದೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ ಪ್ರತಿ ಜಿಲ್ಲೆಗಳಿಗೂ ಆಯಾಯ ಜಿಲ್ಲೆಯ ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡನಾಧಿಕಾರಿಗಳನ್ನು 'ನ್ಯಾಯ ನಿರ್ಣಯ ಅಧಿಕಾರಿ' ಎಂದು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಯೋಗ ಶಾಲೆಗಳಲ್ಲಿ ಮುಖ್ಯ/ಹಿರಿಯ/ಸಹಾಯಕ/ಕೆಮಿಸ್ಟ್‌ಗಳ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದವರನ್ನು ಅವರ ಕರ್ತವ್ಯದ ಜೊತೆಗೆ 'ಆಹಾರ ವಿಶ್ಲೇಷಕ' ರನ್ನಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಜಿಲ್ಲಾ ಸರ್ವೇಕ್ಷಣಾ ಅಧಿಕಾರಿಗಳನ್ನು ಆಯಾಯಾ ಜಿಲ್ಲೆಗಳಲ್ಲಿ ಅವರ ಮೂಲಕರ್ತವ್ಯದ ಜೊತೆಗೆ 'ಅಂಕಿತ ಅಧಿಕಾರಿ' ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿನ ಮುಖ್ಯ ಆರೋಗ್ಯಾಧಿಕಾರಿಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಂಕಿತ ಅಧಿಕಾರಿ ಎಂದು ಇದರ ಜೊತೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಿರಿಯ/ಹಿರಿಯ ಆರೋಗ್ಯ ಸಹಾಯಕ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದವರನ್ನು ಅವರ ಮೂಲ ಹುದ್ದೆಯ ಕರ್ತವ್ಯದ ಜೊತೆಗೆ 'ಆಹಾರ ಸುರಕ್ಷತಾ ಅಧಿಕಾರಿ' ಎಂದು ಮೇಲೆ ಓದಲಾದ ಕ್ರಮಾಂಕ (4) ರಲ್ಲಿನ ಸರ್ಕಾರದ ಅಧಿಸೂಚನೆಗಳು ದಿನಾಂಕ: 30.07.2011ರಲ್ಲಿ ನೇಮಕ ಮಾಡಲಾಗಿದೆ.

ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯನ್ನು ರಾಜ್ಯದಲ್ಲಿ ಜಾರಿಗೊಳಿಸುವ ಉದ್ದೇಶದಿಂದ ಆಹಾರ ಸುರಕ್ಷತೆ ಆಯಾಕ್ತಾಲಯ ಎಂಬ ವಿಭಾಗವನ್ನು ರಚಿಸಿ, ಅದಕ್ಕೆ ಅವಶ್ಯಕವಾಗಿ ಬೇಕಾಗಿರುವ 614 ಹುದ್ದೆಗಳಲ್ಲಿ 311 ವಿವಿಧ ವೃಂದದ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಮತ್ತು ಇನ್ನುಳಿದ 303 ಹುದ್ದೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಹಾಲಿ ಇರುವ ಹುದ್ದೆಗಳನ್ನು ಮರು ಪದನಾಮೀಕರಿಸಿ ಮತ್ತು ಉನ್ನತಿಕರಿಸುವಂತೆ ಮೇಲೆ ಓದಲಾದ ಕ್ರಮಾಂಕ (5)ರ ಪತ್ರಗಳಲ್ಲಿ ಆಯುಕ್ತರು, ಆಹಾರ ಸುರಕ್ಷತಾ ಹಾಗೂ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಈ ಪ್ರಸ್ತಾವನೆಯ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ವಿಷಯದ ಬಗ್ಗೆ ಆರ್ಥಿಕ ಇಲಾಖೆಯೊಡನೆ ಸಮಲೋಚಿಸಲಾಗಿದೆ. ಮೇಲೆ ಓದಲಾದ ಕ್ರಮಾಂಕ (6) ರಲ್ಲಿನ ದಿನಾಂಕ: 31.07.2012ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಕೆಳಕಂಡಂತೆ ಸಹಮತ/ಅಭಿಪ್ರಾಯವನ್ನು ನೀಡಿದೆ:–

(i) ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯನ್ನು ಕಾರ್ಯರೂಪಕ್ಕೆ ತರಲು ಅವಶ್ಯಕವಾಗಿರುವ 177 ವಿವಿಧ ವೃಂದದ ಹುದ್ದೆಗಳನ್ನು ಹೊಸದಾಗಿ ಸೃಜಿಸುವುದು ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ 238 ಹುದ್ದೆಗಳನ್ನು ಮರುಪದನಾಮೀಕರಿಸುವುದು.

(ii) ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ 2011ರಲ್ಲಿ ನಿಗದಿಪಡಿಸಿದ ಅರ್ಹತೆಯನ್ನು ಹೊಂದಿದ ಕಿರಿಯ ಆಹಾರ ಸುರಕ್ಷತಾ ಅಧಿಕಾರಿ ಮತ್ತು ಹಿರಿಯ ಆಹಾರ ಸುರಕ್ಷತಾ ಅಧಿಕಾರಿಗಳಿಗೆ ಕ್ರಮವಾಗಿ ರೂ. 10000–18150 ಮತ್ತು ರೂ. 11400–21600 ವೇತನ ಶ್ರೇಣಿಯನ್ನು ನೀಡುವುದು ಹಾಗೂ ಈ ಅರ್ಹತೆಯನ್ನು ಹೊಂದಿರದ ಕಿರಿಯ ಆಹಾರ ನಿರೀಕ್ಷಕರು ಮತ್ತು ಹಿರಿಯ ಆಹಾರ ನಿರೀಕ್ಷಕರುಗಳನ್ನು ಹಾಲಿ ಇರುವ ವೇತನ ಶ್ರೇಣಿಯಲ್ಲೇ ಮುಂದುವರೆಸಿ ರೂ. 8825–16000 ವೇತನ ಶ್ರೇಣಿಯ ಕಿರಿಯ ಆಹಾರ ನಿರೀಕ್ಷಕರ ಹುದ್ದೆಯನ್ನು ಕಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್–II ಎಂದು ಹಾಗೂ ರೂ. 10800–20025 ವೇತನ ಶ್ರೇಣಿಯ ಹಿರಿಯ ಆಹಾರ ನಿರೀಕ್ಷಕರ ಹುದ್ದೆಯನ್ನು ಹಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್–II ಎಂದು ಪುನರ್ ಪದನಾಮೀಕರಿಸುವುದು;

(iii) ಈ ರೀತಿ ಪುನರ್ ಪದನಾಮೀಕರಿಸಿದ ಹುದ್ದೆಗಳು ಮತ್ತು ಅಂಕಿತ ಅಧಿಕಾರಿಗಳ ಹುದ್ದೆಗಳ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆಗೆ ಪ್ರತ್ಯೇಕವಾಗಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿ ಸಹಮತ ಪಡೆಯುವುದು;

(iv) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರನ್ನು 'ಆಹಾರ ಸುರಕ್ಷತಾ ಆಯುಕ್ತರು' ಎಂದು ಹೆಚ್ಚುವರಿಯಾಗಿ ಪದನಾಮಿಕರಿಸುವುದು ಹಾಗೂ

(v) 30 ಜಿಲ್ಲಾ ಅಂಕಿತ ಅಧಿಕಾರಿಗಳಿಗೆ ಹೊರ ಗುತ್ತಿಗೆ ಮುಖಾಂತರ ವಾಹನ ಸೌಲಭ್ಯ ಪಡೆಯುವುದು. ಮೈಸೂರು ಮತ್ತು ಹುಬ್ಬಳ್ಳಿ, ಧಾರವಾಡ ಮಹಾ ನಗರ ಪಾಲಿಕೆಯ ಅಂಕಿತ ಅಧಿಕಾರಿಗಳಿಗೆ 2 ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಂಕಿತ ಅಧಿಕಾರಿಗಳಿಗೆ ಅವಶ್ಯಕತೆ ಇದ್ದಲ್ಲಿ 4 ವಾಹನ ಸೌಲಭ್ಯವನ್ನು ಹೊರಗುತ್ತಿಗೆ ಮುಖಾಂತರ ಒದಗಿಸುವುದು. ಆಹಾರ ವ್ಯಾಪಾರಕ್ಕೆ ಸಂಬಂಧಿಸಿದಂತೆ ಪರವಾನಗಿಗಾಗಿ ನೀಡುವ ಅರ್ಜಿಯೊಂದಿಗೆ ಆಹಾರ ವ್ಯಾಪಾರ ಪರಿಶೀಲನೆ ಮತ್ತು ವಿತರಣೆ ಹಾಗೂ ನೋಂದಣಿ ಮುಂತಾದ ವಿಷಯವನ್ನು ಗಣಕೀಕರಣ ಮಾಡಿ, ಆನ್‌ಲೈನ್ ಮುಖಾಂತರ ನೀಡುವ ವ್ಯವಸ್ಥೆ ಬಗ್ಗೆ ಕ್ರಮತೆಗೆದುಕೊಳ್ಳುವುದು.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 317 ಸಿಜಿಇ 2011 ಬೆಂಗಳೂರು, ದಿನಾಂಕ: 23.08.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆ 2006 ಮತ್ತು ಅದರಡಿ ರಚಿಸಿರುವ ಆಹಾರ ಸುರಕ್ಷತಾ ಮತ್ತು ಗುಣಮಟ್ಟ ನಿಯಮಗಳು 2011ನ್ನು ರಾಜ್ಯದಲ್ಲಿ ಜಾರಿಗೊಳಿಸಲು ಅವಶ್ಯವಿರುವ ಹುದ್ದೆಗಳನ್ನು ಸೃಜಿಸುವ/ಪದನಾಮೀಕರಿಸುವ ಕುರಿತಂತೆ ಕೆಳಕಂಡಂತೆ ಆದೇಶಿಸಿದೆ:–

1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಈ ಹುದ್ದೆಯನ್ನು "ಆಯುಕ್ತರು, ಆಹಾರ ಸುರಕ್ಷತೆ" ಎಂದು ಹೆಚ್ಚುವರಿಯಾಗಿ ಪದನಾಮೀಕರಿಸಿದೆ.

2. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿನ ಕೆಳಕಂಡ ಹುದ್ದೆಗಳನ್ನು, ಆ ಹುದ್ದೆಗಳ ಎದುರು ನಮೂದಿಸಿದ ಹುದ್ದೆಗಳಾಗಿ ಮರುಪದನಾಮೀಕರಿಸಿದೆ:–

| ಕ್ರ.ಸ. | ಹಾಲಿ ಇರುವ ಹುದ್ದೆಯ ಪದನಾಮ | ಸಂಖ್ಯೆ | ಮರುಪದನಾಮೀಕರಿಸಿದ ಹುದ್ದೆ | ವೇತನ ಶ್ರೇಣಿ |
|---|---|---|---|---|
| 1 | 2 | 3 | 4 | 5 |
| 1 | ಅಪರ ನಿರ್ದೇಶಕರು, (ಪ್ರಾಥಮಿಕ ಆರೋಗ್ಯ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು. | 1 | ಜಂಟಿ ಆಯುಕ್ತರು, ಆಹಾರ ಸುರಕ್ಷತಾ ಮತ್ತು ಗುಣಮಟ್ಟ | ₹ 48900–63600 |
| 2 | ಜಂಟಿ ನಿರ್ದೇಶಕರು, (ಪಿ.ಹೆಚ್.ಐ) ಸಾರ್ವಜನಿಕ ಆರೋಗ್ಯ ಕೇಂದ್ರ, | 1 | ಜಂಟಿ ನಿರ್ದೇಶಕರು (ಆಹಾರ ಸುರಕ್ಷತಾ ಮತ್ತು ಗುಣಮಟ್ಟ) | ₹ 40050–56550 |
| 3 | ಚೀಫ್ ಕೆಮಿಸ್ಟ್ | 1 | ಮುಖ್ಯ ಆಹಾರ ವಿಶ್ಲೇಷಕರು | ₹ 36300–53850 |
| 4 | ಹಿರಿಯ ಕೆಮಿಸ್ಟ್ | 4 | ಹಿರಿಯ ಆಹಾರ ವಿಶ್ಲೇಷಕರು | ₹ 30400–51300 |
| 5 | ಕೆಮಿಸ್ಟ್ | 9 | ಆಹಾರ ವಿಶ್ಲೇಷಕರು | ₹ 28100–50100 |
| 6 | ಕಿರಿಯ ಕೆಮಿಸ್ಟ್ | 16 | ಕಿರಿಯ ಆಹಾರ ವಿಶ್ಲೇಷಕರು | ₹ 22800–43200 |
| 7 | ಹಿರಿಯ ಆಹಾರ ನಿರೀಕ್ಷಕರು | 30 | ಹಿರಿಯ ಆಹಾರ ಸುರಕ್ಷತಾ ಅಧಿಕಾರಿ | ₹ 22800–43200 |
| 8 | ಕಿರಿಯ ಆಹಾರ ನಿರೀಕ್ಷಕರು | 176 | ಆಹಾರ ಸುರಕ್ಷತಾ ಅಧಿಕಾರಿ | ₹ 20000–36300 |
| ಒಟ್ಟು | | 238 | | |

ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆ ಮತ್ತು ಅದಕ್ಕೆ ಅನುಗುಣವಾಗಿ ರಚಿತವಾದ ನಿಯಮಗಳಲ್ಲಿ ನಿಗಧಿಪಡಿಸಿದ ಅರ್ಹತೆಯನ್ನು ಹೊಂದಿದ ಆಹಾರ ಸುರಕ್ಷತಾ ಅಧಿಕಾರಿ ಮತ್ತು ಹಿರಿಯ ಆಹಾರ ಸುರಕ್ಷತಾ ಅಧಿಕಾರಿಗಳ ಹುದ್ದೆಗೆ ಕ್ರಮವಾಗಿ ರೂ. 20000–36300 ಮತ್ತು ರೂ. 22800–43200 ವೇತನ ಶ್ರೇಣಿಯನ್ನು ನಿಗಧಿಪಡಿಸಿದೆ. ಈ ಕಾಯ್ದೆ ಮತ್ತು ನಿಯಮಗಳಲ್ಲಿ ನಿಗಧಿಪಡಿಸಿದ ಅರ್ಹತೆಯನ್ನು ಹೊಂದಿರದೆ ಈಗಾಗಲೇ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ನಿಯಮಗಳ 2.1.3(2) ರ ಪ್ರಕಾರ ಆಹಾರ ಸುರಕ್ಷತಾ ಅಧಿಕಾರಿ ಹುದ್ದೆಗಳಲ್ಲಿ ಮುಂದುವರೆದಿರುವ ಕಿರಿಯ ಆಹಾರ ನಿರೀಕ್ಷಕರು ಮತ್ತು ಹಿರಿಯ ಆಹಾರ ನಿರೀಕ್ಷಕರುಗಳನ್ನು ಆ ಹುದ್ದೆಯ ಪ್ರಸ್ತುತ ವೇತನ ಶ್ರೇಣಿಯಲ್ಲಿಯೇ ಅವರುಗಳನ್ನು ಮುಂದಿನ ಆದೇಶದವರೆಗೆ ಮುಂದುವರೆಸಿ, ರೂ. 17650–32000 ವೇತನ ಶ್ರೇಣಿಯ ಕಿರಿಯ ಆಹಾರ ನಿರೀಕ್ಷಕರ ಹುದ್ದೆಯನ್ನು ಕಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್–II ಎಂದು ರೂ. 21600–40050 ವೇತನ ಶ್ರೇಣಿಯ ಹಿರಿಯ ಆಹಾರ ನಿರೀಕ್ಷಕರ ಹುದ್ದೆಯನ್ನು ಹಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್–II ಎಂದು ಮರುಪದನಾಮೀಕರಿಸಿದೆ.

**3. ಕೆಳಕಂಡ ಹುದ್ದೆಗಳನ್ನು ಹೊಸದಾಗಿ ಸೃಜಿಸಲಾಗಿದೆ:–**

**ಎ. ಪ್ರಯೋಗಾಲಯಗಳ ಹುದ್ದೆಗಳು:**

| ಕ್ರಸಂ | ಹುದ್ದೆಯ ಹೆಸರು | ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಮುಖ್ಯ ಆಹಾರ ವಿಶ್ಲೇಷಕರು | 3 | ₹ 36300–53850 |
| 2 | ಕಿರಿಯ ಆಹಾರ ವಿಶ್ಲೇಷಕರು | 9 | ₹ 22800–43200 |

| ಕ್ರ.ಸಂ | ಹುದ್ದೆಯ ಹೆಸರು | ಸಂಖ್ಯೆ | ವೇತನ ಶ್ರೇಣಿ |
|---|---|---|---|
| 3 | ಕಿರಿಯ ಮೈಕ್ರೊಬಯಾಲಿಜಿಸ್ಟ್ | 1 | ₹ 22800–43200 |
| ಒಟ್ಟು | | **13** | |

ಬಿ. ಜಿಲ್ಲಾ ಮಟ್ಟದ ಹುದ್ದೆಗಳು:

| ಕ್ರ.ಸಂ | ಹುದ್ದೆಯ ಹೆಸರು | ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಅಂಕಿತ ಅಧಿಕಾರಿ | 30 | ₹ 28100–50100 |
| 2 | ಪ್ರಥಮ ದರ್ಜೆ ಸಹಾಯಕರು | 30 | ₹ 14550–26700 |
| 3 | ಡಾಟಾ ಎಂಟ್ರಿ ಅಪರೇಟರ್ | 30 | ₹ 8000 (ಸಂಚಿತ ವೇತನ) |
| ಒಟ್ಟು | | **90** | |

ಸಿ. ರಾಜ್ಯ ಮಟ್ಟದ ಮುಖ್ಯ ಕಛೇರಿಯ ಹುದ್ದೆಗಳು:

| ಕ್ರ.ಸಂ | ಹುದ್ದೆಯ ಹೆಸರು | ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಉಪ ನಿರ್ದೇಶಕರು (ಆಡಳಿತ) | 1 | ₹ 36300–53850 |
| 2 | ಉಪ ನಿರ್ದೇಶಕರು (ಸ್ಕ್ವಾಡ್) | 1 | ₹ 36300–53850 |
| 3 | ಕಾನೂನು ಸಲಹೆಗಾರರು | 1 | ₹ 25000 (ಸಂಚಿತ ವೇತನ) |
| 4 | ಸಹಾಯಕ ಆಡಳಿತಾಧಿಕಾರಿ | 1 | ₹ 21600–40050 |
| 5 | ಶೀಘ್ರಲಿಪಿಗಾರರು | 1 | ₹ 14550–26700 |
| 6 | ಸಹಾಯಕ ಸಾಂಖ್ಯಿಕ ಅಧಿಕಾರಿ | 1 | ₹ 20000–36300 |
| 7 | ಹಿರಿಯ ಆಹಾರ ಸುರಕ್ಷತಾಧಿಕಾರಿ | 2 | ₹ 22800–43200 |
| 8 | ಆಹಾರ ಸುರಕ್ಷತಾಧಿಕಾರಿ | 2 | ₹ 20000–36300 |
| 9 | ಡಾಟಾ ಎಂಟ್ರಿ ಅಪರೇಟರ್ | 2 | ₹ 8000 (ಸಂಚಿತ ವೇತನ) |
| 10 | ವಾಹನ ಚಾಲಕರು | 2 | ₹ 9200 (ಸಂಚಿತ ವೇತನ) |
| 11 | ಗ್ರೂಪ್–ಡಿ | 2 | ₹ 9600–14550 |
| ಒಟ್ಟು | | **16** | |

ಡಿ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಹುದ್ದೆಗಳು:

| ಕ್ರ.ಸಂ | ಹುದ್ದೆಯ ಹೆಸರು | ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಅಂಕಿತ ಅಧಿಕಾರಿ | 4 | ₹ 28100–50100 |
| 2 | ಹಿರಿಯ ಆಹಾರ ಸುರಕ್ಷತಾಧಿಕಾರಿ | 2 | ₹ 22800–43200 |
| 3 | ಆಹಾರ ಸುರಕ್ಷತಾಧಿಕಾರಿ | 20 | ₹ 20000–36300 |
| 4 | ಪ್ರಥಮ ದರ್ಜೆ ಸಹಾಯಕರು | 2 | ₹ 14550–26700 |
| 5 | ಡಾಟಾ ಎಂಟ್ರಿ ಅಪರೇಟರ್ | 2 | ₹ 8000(ಸಂಚಿತ ವೇತನ) |

| ಕ್ರ.ಸಂ | ಹುದ್ದೆಯ ಹೆಸರು | ಸಂಖ್ಯೆ | ವೇತನ ಶ್ರೇಣಿ |
|---|---|---|---|
| 6 | ಗ್ರೂಪ್–ಡಿ | 2 | ₹ 9600–14550 |
| **ಒಟ್ಟು** | | **32** | |

**ಇ. ಉಳಿದ 8 ಮಹಾನಗರ ಪಾಲಿಕೆಯ ಹುದ್ದೆಗಳು:–**

| ಕ್ರ.ಸ | ಹುದ್ದೆಯ ಹೆಸರು | ಮೈಸೂರು ಹಾಗೂ ಹುಬ್ಬಳಿ– ಧಾರವಾಡ ಮಹಾನಗರ ಪಾಲಿಕೆ | ಇತರ ಪಾಲಿಕೆಗಳು | ವೇತನ ಶ್ರೇಣಿ |
|---|---|---|---|---|
| 1 | ಅಂಕಿತ ಅಧಿಕಾರಿ | 2 | – | ₹ 28100–50100 |
| 2 | ಆಹಾರ ಸುರಕ್ಷತಾಧಿಕಾರಿ | 6 | 6 | ₹ 20000–36300 |
| 3 | ಪ್ರಥಮ ದರ್ಜೆ ಸಹಾಯಕರು | 2 | 6 | ₹ 14550–26700 |
| 4 | ಡಾಟಾ ಎಂಟ್ರಿ ಅಪರೇಟರ್ | 2 | – | ₹ 8000(ಸಂಚಿತ ವೇತನ) |
| 5 | ಗ್ರೂಪ್–ಡಿ | 2 | – | ₹ 9600–14550 |
| **ಒಟ್ಟು** | | **14** | **12** | |
| **ಒಟ್ಟು** | | **26** | | |

ಹೊಸದಾಗಿ ಸೃಜಿಸಿದ ಒಟ್ಟು ಹುದ್ದೆಗಳು : **177**

ಜಿಲ್ಲೆಯ ಅಂಕಿತ ಅಧಿಕಾರಿಗಳಿಗೆ ಒಂದೊಂದರಂತೆ 30 ವಾಹನಗಳನ್ನು ಹೊರಗುತ್ತಿಗೆ ಮುಖಾಂತರ ಪಡೆಯುವುದು. ಮೈಸೂರು, ಹುಬ್ಬಳ್ಳಿ ಮತ್ತು ಧಾರವಾಡ ಮಹಾನಗರ ಪಾಲಿಕೆಗಳ ಎರಡು ಅಂಕಿತ ಅಧಿಕಾರಿಗಳಿಗೆ ಎರಡು ವಾಹನಗಳನ್ನು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ 4 ಅಂಕಿತ ಅಧಿಕಾರಿಗಳಿಗೆ 4 ವಾಹನಗಳನ್ನು ಅವಶ್ಯಕವಿದ್ದಲ್ಲಿ ಹೊರಗುತ್ತಿಗೆ ಮುಖಾಂತರ ಒದಗಿಸುವುದು.

ಕಿರಿಯ ಆಹಾರ ಸುರಕ್ಷತಾ ಅಧಿಕಾರಿ (ಕ್ರಮಬದ್ದ ಮತ್ತು ಗ್ರೇಡ್– II) ಹಿರಿಯ ಆಹಾರ ಸುರಕ್ಷತಾ ಅಧಿಕಾರಿ (ಕ್ರಮಬದ್ದ ಮತ್ತು ಗ್ರೇಡ್– II), ಕಿರಿಯ ಮೈಕ್ರೊಬಯಾಲಿಜಿಸ್ಟ್ ಮತ್ತು ಅಂಕಿತ ಅಧಿಕಾರಿ ಹುದ್ದೆಗಳ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆಗೆ ಪ್ರತ್ಯೇಕ ಪ್ರಸ್ತಾವನೆ ಸಲ್ಲಿಸಲು ಆಯುಕ್ತರು, ಆಹಾರ ಸುರಕ್ಷತಾ ಹಾಗೂ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರಿಗೆ ನಿರ್ದೇಶಿಸಿದೆ. ಈ ವೃಂದಗಳೂ ಸೇರಿದಂತೆ ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯಡಿ ಬೇರೆ ಯಾವುದಾದರೂ ವೃಂದಕ್ಕೆ ಹೆಚ್ಚುವರಿ/ಹೊಸ ವಿದ್ಯಾರ್ಹತೆ ನಿಗದಿಪಡಿಸಿದ್ದಲ್ಲಿ, ಅವುಗಳನ್ನು ಗಣನೆಗೆ ತೆಗೆದುಕೊಂಡು ಸಮಗ್ರವಾದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಜಾರಿಗೊಳಿಸುವ ಸಲುವಾಗಿ ಸೂಕ್ತ ಪ್ರಸ್ತಾವನೆಯನ್ನು ಸಹ ತಯಾರಿಸಿ ಕಳುಹಿಸಬೇಕೆಂದು ಆಹಾರ ಸುರಕ್ಷತಾ ಆಯುಕ್ತರಿಗೆ ನಿರ್ದೇಶಿಸಿದೆ.

ಆಹಾರ ವ್ಯಾಪಾರಕ್ಕೆ ಸಂಬಂಧಿಸಿದಂತೆ, ಪರವಾನಗಿಗಾಗಿ ಅರ್ಜಿ ಮತ್ತು ಅದರ ಪರಿಶೀಲನೆ, ಪರವಾನಗಿ ನೀಡುವುದು ಮತ್ತು ನೋಂದಣಿ ಮುಂತಾದವುಗಳನ್ನು ಗಣಕೀಕರಿಸಿ, ಆನ್‌ಲೈನ್ ಮುಖಾಂತರ ನೀಡುವ ವ್ಯವಸ್ಥೆ ಮಾಡಲು ಆಹಾರ ಸುರಕ್ಷತಾ ಆಯುಕ್ತರು ಕ್ರಮ ವಹಿಸಲು ಸಹ ನಿರ್ದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 643 ವೆಚ್ಚ 5/2012, ದಿನಾಂಕ: 31.07.2012ರಲ್ಲಿ ನೀಡಿರುವ ಸಹಮತದೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, (ಆರೋಗ್ಯ 1&2)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**P.R. - 2054**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಯವರಿಂದ ಮೆ : ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ವರ್ಗಾವಣೆಯಾಗಿರುವ 100 ಮೆ.ವ್ಯಾ. ಸಾಮರ್ಥ್ಯದ ಯೋಜನೆಗಳಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 6.40 ಮೆ.ವ್ಯಾ ಹಾಗೂ 4.8 ಮೆ.ವ್ಯಾ. ಸಾಮರ್ಥ್ಯದ ಟರ್ಬೈನ್ಸ್‌ಗಳ ಸ್ಥಳ ಬದಲಾವಣೆ ಹಾಗೂ ಈ ಯೋಜನೆಗಳ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 124 ಎನ್‌ಸಿಇ 2012 ದಿನಾಂಕ: 29.03.2012.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಎನ್‌ಸಿಇ 2012 ದಿನಾಂಕ: 29.03.2012.

4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 147 ಎನ್‌ಸಿಇ 2012 ದಿನಾಂಕ: 02.05.2012.

5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 149 ಎನ್‌ಸಿಇ 2012 ದಿನಾಂಕ: 02.05.2012.

6) ಸರ್ಕಾರಿ ಆದೇಶ ಸಂಖ್ಯೆ: ಇಎನ್ 160 ಎನ್‌ಸಿಇ 2012 ದಿನಾಂಕ: 16.5.2012.

7) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/TWEL-16.8 & 6.4/2012/2310 ದಿನಾಂಕ: 08/18.08.2012 ಮತ್ತು ಕೆಆರ್‌ಇಡಿ/08/SRR/ TWEL-100 MW/ VWILLP/2012/2474 ದಿನಾಂಕ: 04/07.09.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಕೆಲವೊಂದು ಷರತ್ತಿಗೊಳಪಟ್ಟು ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 19.20 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 16.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 16.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 6.4 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ ಮೆ:: ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ವಿವಿಧ ಆದೇಶಗಳಲ್ಲಿ ವರ್ಗಾವಣೆಯಾಗಿರುವ ಒಟ್ಟು 67.2 ಮೆ.ವ್ಯಾ. ಸಾಮರ್ಥ್ಯದಲ್ಲಿ ಈ ಕೆಳಕಂಡಂತೆ ಬಾಕಿ ಉಳಿದಿದ್ದ 24.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 30.6.2012ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

| ಕ್ರಮ ಸಂಖ್ಯೆ | ಸರ್ಕಾರಿ ಆದೇಶ ಸಂಖ್ಯೆ | ವರ್ಗಾವಣೆಯಾಗಿರುವ ಸಾಮರ್ಥ್ಯ ಮೆ.ವ್ಯಾಗಳಲ್ಲಿ | ಈಗಾಗಲೇ ಅನುಷ್ಠಾನಗೊಂಡಿರುವ ಸಾಮರ್ಥ್ಯ | ಬಾಕಿ ಉಳಿದಿರುವ ಸಾಮರ್ಥ್ಯ |
|---|---|---|---|---|
| 1 | ಇಎನ್ 124 ಎನ್‌ಸಿಇ 2012 ದಿನಾಂಕ 29.3.2012 | 19.20 | 10.40 | 8.80 |

| ಕ್ರಮ ಸಂಖ್ಯೆ | ಸರ್ಕಾರಿ ಆದೇಶ ಸಂಖ್ಯೆ | ವರ್ಗಾವಣೆಯಾಗಿರುವ ಸಾಮರ್ಥ್ಯ ಮೆ.ವ್ಯಾಗಳಲ್ಲಿ | ಈಗಾಗಲೇ ಅನುಷ್ಠಾನಗೊಂಡಿರುವ ಸಾಮರ್ಥ್ಯ | ಬಾಕಿ ಉಳಿದಿರುವ ಸಾಮರ್ಥ್ಯ |
|---|---|---|---|---|
| 2 | ಇಎನ್ 125 ಎನ್‌ಸಿಇ 2012 ದಿನಾಂಕ 29.3.2012 | 16.80 | 11.20 | 5.60 |
| 3 | ಇಎನ್ 138 ಎನ್‌ಸಿಇ 2012 ದಿನಾಂಕ 29.3.2012 | 31.20 | 20.80 | 10.40 |
| ಒಟ್ಟು | | **67.20** | **42.40** | **24.80** |

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ 08/18.8.2012ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ಹಾಗೂ (5)ರಲ್ಲಿನ ಆದೇಶಗಳಲ್ಲಿ ಮಂಜೂರಾಗಿರುವ ಯೋಜನೆಗಳಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 0.8 ಮೆ.ವ್ಯಾ. ಸಾಮರ್ಥ್ಯದ ಒಂದು ಟರ್ಬೈನ್ಸ್‌ನ ಲೊಕೇಷನ್ (WTG ಸಂಖ್ಯೆ – 40) ಮತ್ತು 4 ಮೆ.ವ್ಯಾ. ಸಾಮರ್ಥ್ಯದ 5 ಟರ್ಬೈನ್ಸ್‌ನ ಲೊಕೇಷನ್‌ನ್ನು (WTG ಸಂಖ್ಯೆ – 76, 77, 78,79, ಮತ್ತು 90) ಒಟ್ಟು 4.8 ಮೆ.ವ್ಯಾ. ಸಾಮರ್ಥ್ಯದ ಹಾಗೂ ದಿನಾಂಕ 04/07.9.2012ರ ಪತ್ರದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (2) ಹಾಗೂ (4)ರಲ್ಲಿನ ಆದೇಶಗಳಲ್ಲಿ ಮಂಜೂರಾಗಿರುವ ಯೋಜನೆಗಳಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 5.6 ಮೆ.ವ್ಯಾ. ಸಾಮರ್ಥ್ಯದ 7 ಟರ್ಬೈನ್ಸ್‌ಗಳ ಲೊಕೇಷನ್‌ಗಳನ್ನು (WTG ಸಂಖ್ಯೆ – 1, 3, 4, 7, 8, 16 ಮತ್ತು 25) ಮತ್ತು 0.8 ಮೆ.ವ್ಯಾ. ಸಾಮರ್ಥ್ಯದ ಒಂದು ಟರ್ಬೈನ್‌ನ ಲೊಕೇಷನ್‌ಗಳ (WTG ಸಂಖ್ಯೆ – 75) ಒಟ್ಟು 6.4 ಮೆ.ವ್ಯಾ. ಸಾಮರ್ಥ್ಯದ ಯೋಜನೆಗಳ ಅನುಮೋದಿತ ಸ್ಥಳಗಳನ್ನು ಸಾಯಿಲ್ ಟೆಸ್ಟ್ ಮಾಡಿದಾಗ ಯೋಜನೆಗೆ ಯೋಗ್ಯವಲ್ಲವೆಂದು ಕಂಡುಬಂದಿರುವುದರಿಂದ ಈ ಸ್ಥಳಗಳ ಬದಲಾಗಿ ಬೇರೆ ಸ್ಥಳಗಳಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅಭಿವೃದ್ಧಿದಾರರು ಉದ್ದೇಶಿಸಿದ್ದು ಈ ಸ್ಥಳವು ಖಾಸಗಿ ಜಮೀನಿನಲ್ಲಿ ಬರುತ್ತದೆ ಹಾಗೂ ಯೋಜನೆಗಾಗಿ ಮಂಜೂರಾಗಿರುವ ಒಟ್ಟಾರೆ ಸ್ಥಳದಲ್ಲಿಯೇ ಬರುವುದರಿಂದ ಈ ಸಾಮರ್ಥ್ಯದ ಯೋಜನೆಗಳ ಟರ್ಬೈನ್ಸ್‌ಗಳ ಲೊಕೇಷನ್‌ಗಳನ್ನು ಬದಲಾಯಿಸಲು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿ ಕೆ.ಆರ್.ಇ.ಡಿ.ಎಲ್. ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 237 ಎನ್‌ಸಿಇ 2012, ಬೆಂಗಳೂರು, ದಿನಾಂಕ: 28.09.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ : ತಡಸ್ ವಿಂಡ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಮಂಜೂರಾಗಿರುವ ಸರ್ಕಾರಿ ಆದೇಶ ಸಂಖ್ಯೆ ಇಎನ್ 124 ಎನ್‌ಸಿಇ 2012 ದಿನಾಂಕ 29.03.2012 (5.6 ಮೆ.ವ್ಯಾ) ಹಾಗೂ ಸರ್ಕಾರಿ ಆದೇಶ ಸಂಖ್ಯೆ ಇಎನ್ 147 ಎನ್‌ಸಿಇ 2012 ದಿನಾಂಕ 02.05.2012 (0.8 ಮೆ.ವ್ಯಾ) ಒಟ್ಟು 6.40 ಮೆ.ವ್ಯಾ. ಮತ್ತು ಸರ್ಕಾರಿ ಆದೇಶ ಸಂಖ್ಯೆ ಇಎನ್ 125 ಎನ್‌ಸಿಇ 2012 ದಿನಾಂಕ 29.03.2012 (0.8 ಮೆ.ವ್ಯಾ) ಹಾಗೂ ಸರ್ಕಾರಿ ಆದೇಶ ಸಂಖ್ಯೆ ಇಎನ್ 149 ಎನ್‌ಸಿಇ 2012 ದಿನಾಂಕ 02.05.2012 (4.0 ಮೆ.ವ್ಯಾ) ಒಟ್ಟು 4.8 ಮೆ.ವ್ಯಾಗೆ ಈ ಕೆಳಕಂಡಂತೆ ಸ್ಥಳ ಬದಲಾವಣೆಗೆ ಅನುಮೋದನೆ ನೀಡಲಾಗಿದೆ ಹಾಗೂ ಸದರಿ ಸಾಮರ್ಥ್ಯವನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 01.7.2012 ರಿಂದ **ದಿನಾಂಕ 30.11.2012** ರವರೆಗೆ ವಿಸ್ತರಿಸಿ ಅದೇಶಿಸಿದೆ. ಇದಕ್ಕೆ ಸಂಬಂಧಿಸಿದ ಕಾಲಾವಕಾಶ ಶುಲ್ಕವನ್ನು ಪಾವತಿಸತಕ್ಕದ್ದು.

ಸರ್ಕಾರಿ ಆದೇಶ ಸಂಖ್ಯೆ ಇಎನ್ 124 ಎನ್‌ಸಿಇ 2012 ದಿನಾಂಕ 29.3.2012ರಲ್ಲಿ ಮಂಜೂರಾಗಿರುವ ಒಟ್ಟು 19.2 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 5.6 ಮೆ.ವ್ಯಾ. ಸಾಮರ್ಥ್ಯದ 7 ಟರ್ಬೈನ್ಸ್‌ಗಳ ಲೊಕೇಷನ್‌ಗಳನ್ನು (WTG ಸಂಖ್ಯೆ – 1, 3, 4, 7, 8, 16 ಮತ್ತು 25) ಮತ್ತು ಸರ್ಕಾರಿ ಆದೇಶ ಸಂಖ್ಯೆ ಇಎನ್ 147 ಎನ್‌ಸಿಇ 2012 ದಿನಾಂಕ 02.05.2012ರಲ್ಲಿ ಮಂಜೂರಾಗಿರುವ ಒಟ್ಟು 16.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 0.8 ಮೆ.ವ್ಯಾ. ಸಾಮರ್ಥ್ಯದ ಒಂದು ಟರ್ಬೈನ್‌ನ ಲೊಕೇಷನ್ (WTG ಸಂಖ್ಯೆ – 75) ಸೇರಿ ಒಟ್ಟು 6.4 ಮೆ.ವ್ಯಾ. ಸಾಮರ್ಥ್ಯದ ಯೋಜನೆಗಳ ಈ ಕೆಳಕಂಡಂತಿರುವ ಟರ್ಬೈನ್ಸ್‌ಗಳ ಲೊಕೇಷನ್‌ಗಳ ಬದಲಾಗಿ –

| Village Name | Taluk/ District | MW | Land Survey number | Extent of Land per WTG (Acres) | Wind Turbine Generator location No | Latitude, Longitude and Ridge peaks |
|---|---|---|---|---|---|---|
| Malali | Kundhgol/Dharwad | 0.80 | 72 | 1.1 | 1 | Lat: 15°05'59.9 N<br>Long: 75°11'05'' E |
| Kunkur | Kundhgol/Dharwad | 0.80 | 147 | 1.1 | 3 | Lat: 15°05'13.6 N<br>Long: 75°11'13.6'' E |

| Village Name | Taluk/ District | MW | Land Survey number | Extent of Land per WTG (Acres) | Wind Turbine Generator location No | Latitude, Longitude and Ridge peaks |
|---|---|---|---|---|---|---|
| Gigaluru | Kundhgol/Dharwad | 0.80 | 72 | 1.1 | 4 | Lat: 15°05'15.9 N<br>Long: 75°11'15.9'' E |
| Hanumanahalli | Shiggoan/Haveri | 0.80 | 13/2 | 1.1 | 7 | Lat: 15°05'16.4 N<br>Long: 75°11'16.4'' E |
| Gigaluru | Kundhgol/Dharwad | 0.80 | 84 | 1.1 | 8 | Lat: 15°05'8.6" N<br>Long: 75°11'8.6" E |
| N.M.Tadas | Shiggaon/Haveri | 0.80 | 34 | 1.1 | 16 | Lat: 15°04'50.3" N<br>Long: 75°11'50.30'' E |
| N.M.Tadas | Shiggaon/<br>Haveri | 0.80 | 57 | 1.1 | 25 | Lat: 15°05'7" N<br>Long: 75°12'7'' E |
| | | **5.6** | | | | |
| Kunkur | Kundakhol/Dharwad | 0.80 | 37 | 1.1 | 75 | Lat: 15°7'10.9" N<br>Long: 75°12'46.7'' E |
| | **TOTAL** | **6.40** | | | | |

ಈ ಕೆಳಕಾಣಿಸಿದ ಲೊಕೇಷನ್‌ಗಳಿಗೆ ಬದಲಾಯಿಸಲಾಗಿದೆ

| Village Name | Taluk/ District | MW | Land Survey number | Extent of Land per WTG (Acres) | Wind Turbine Generator location No | Latitude, Longitude and Ridge peaks |
|---|---|---|---|---|---|---|
| Kunkur | Kundhgol/Dharwad | 0.80 | 143 | 1.1 | 1 | Lat: 15°07'37.5" N<br>Long: 75°9'59.45'' E |
| Kunkur | Kundhgol/Dharwad | 0.80 | 138/2 | 1.1 | 3 | Lat: 15°07'31.1" N<br>Long: 75°10'26.55'' E |
| Kunkur | Kundhgol/Dharwad | 0.80 | 131/5 | 1.1 | 4 | Lat: 15°07'22.45" N<br>Long: 75°10'12.24'' E |
| Gigaluru | Kundhgol/Dharwad | 0.80 | 71 | 1.1 | 7 | Lat: 15°08'0.21" N<br>Long: 75°10'6.10'' E |
| Gigaluru | Kundhgol/Dharwad | 0.80 | 86/3C | 1.1 | 8 | Lat: 15°07'55.14" N<br>Long: 75°9'35.19'' E |
| N.M. Tadas | Shiggaon/Haveri | 0.80 | 43/4,<br>43/5 | 1.1 | 16 | Lat: 15°05'11.69" N<br>Long: 75°10'37.02'' E |
| N.M. Tadas | Shiggaon/Haveri | 0.80 | 64/7 | 1.1 | 25 | Lat: 15°05'5.75" N<br>Long: 75°10'21.21'' E |
| | | **5.6** | | | | |
| Kunkur | Kundhgol/Dharwad | 0.80 | 232/2 | 1.1 | 75 | Lat: 15°07'23.49" N<br>Long: 75°11'8.17'' E |
| | **TOTAL** | **6.40** | | | | |

ಸರ್ಕಾರಿ ಆದೇಶ ಸಂಖ್ಯೆ ಇಎನ್ 125 ಎನ್‌ಸಿಇ 2012 ದಿನಾಂಕ 29.3.2012ರಲ್ಲಿ ಮಂಜೂರಾಗಿರುವ ಒಟ್ಟು 16.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 0.8 ಮೆ.ವ್ಯಾ. ಸಾಮರ್ಥ್ಯದ ಒಂದು ಟರ್ಬೈನ್ಸ್‌ನ ಲೊಕೇಷನ್ (WTG ಸಂಖ್ಯೆ – 40) ಮತ್ತು ಸರ್ಕಾರಿ ಆದೇಶ ಸಂಖ್ಯೆ ಇಎನ್ 149 ಎನ್‌ಸಿಇ 2012 ದಿನಾಂಕ 02.05.2012ರಲ್ಲಿ ಮಂಜೂರಾಗಿರುವ ಒಟ್ಟು 6.4 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ

ಅನುಷ್ಠಾನಕ್ಕೆ ಬಾಕಿ ಇರುವ 4.0 ಮೆ.ವ್ಯಾ. ಸಾಮರ್ಥ್ಯದ 5 ಟರ್ಬೈನ್‌ನ ಲೊಕೇಷನ್ (WTG ಸಂಖ್ಯೆ – 76, 77, 78, 79 ಮತ್ತು 90) ಸೇರಿ ಒಟ್ಟು 4.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಗಳ ಈ ಕೆಳಕಂಡಂತಿರುವ ಟರ್ಬೈನ್ಸ್‌ಗಳ ಲೊಕೇಷನ್‌ಗಳ ಬದಲಾಗಿ –

| Village Name | Taluk/ District | MW | Land Survey number | Wind Turbine Generator location No | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Hirebendegeri | Shiggaon/Haveri | 0.80 | 226/2 | 40 | 1.1 | Lat: 15°4'50.3" N<br>Long: 75°11'50.3'' E |
| | | **0.80** | | | | |
| Hirebendegeri | | 0.80 | 60/3A | 76 | 1.1 | Lat: 15°5'22.3" N<br>Long: 75°14'22.9'' E |
| Hirebendegeri | | 0.80 | 65 | 77 | 1.1 | Lat: 15°5'14" N<br>Long: 75°14'23.2'' E |
| Belavalakoppa | | 0.80 | 103/3&4 | 78 | 1.1 | Lat: 15°5'4.8" N<br>Long: 75°14'23'' E |
| Belavalakoppa | | 0.80 | 103/3&4 | 79 | 1.1 | Lat: 15°4'55.5" N<br>Long: 75°14'17.9'' E |
| Belavalakoppa | | 0.80 | 103/3&4 | 90 | 1.1 | Lat: 15°4'33.4" N<br>Long: 75°14'0.1'' E |
| | | **4.00** | | | | |
| | **TOTAL** | **4.8** | | | | |

**ಈ ಕೆಳಕಾಣಿಸಿದ ಲೊಕೇಷನ್‌ಗಳಿಗೆ ಬದಲಾಯಿಸಲಾಗಿದೆ**

| Village Name | Taluk/ District | MW | Land Survey number | Wind Turbine Generator location No | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Kyalkonda | Shiggaon/ Haveri | 0.80 | 212 | 141 | 1.1 | Lat: 15°4'3.2" N<br>Long: 75°16'36.21'' E |
| | | **0.80** | | | | |
| Hulgur | | 0.80 | 249 | 142 | 1.1 | Lat: 15°4'14.6" N<br>Long: 75°16'50.6'' E |
| Kyalkonda | | 0.80 | 9 | 143 | 1.1 | Lat: 15°4'14.2" N<br>Long: 75°16'28.1'' E |
| Kyalkonda | | 0.80 | 232 | 144 | 1.1 | Lat: 15°4'12.2" N<br>Long: 75°16'5.5'' E |
| Kyalkonda | | 0.80 | 7 | 150 | 1.1 | Lat: 15°4'23.25" N<br>Long: 75°16'18.19'' E |
| Kyalkonda | | 0.80 | 12 | 151 | 1.1 | Lat: 15°4'44.56" N<br>Long: 75°16'20.09'' E |
| | | **4.00** | | | | |
| | **TOTAL** | **4.8** | | | | |

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. - 2149**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 204 ಮೆ.ವ್ಯಾ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆಆರ್‌ಇಡಿ/08/VWILLP-200 to 204MW)/2012/ 2303 ದಿನಾಂಕ: 02/17.08.2012.

5) ದಿನಾಂಕ 21.9.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1'55"- 15°8'0" N<br>**Longitude**: 75°08'56"- 75°14'23" E<br>**Ridge peaks:** 701, 714, 682, 717, 713, 698, 733, 722m AMSL. | 19.80 MW | 59.40 MW | 79.20 MW<br>(99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>**Latitude**: 15°0'0"- 15°10'30" N<br>**Longitude**: 75°15'0"- 75°28'19" E<br>**Ridge peaks:** 681, 671, 676, 638, 624, 698, 664, 701, 720, 663, 682, 664, 708, 665, 664m AMSL. | 49.83 (part capacity of 67.65 MW) | 70.97 | 120.80 MW<br>(151 x 800 KW) |

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವಂತೆ ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಯೋಜನಾ ಪ್ರದೇಶವು ಖಾಸಗಿ ಜಮೀನಾಗಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ / ಪಿಪಿಎ / ಆರ್‌ಇಸಿ Mechanism ರಡಿಯಲ್ಲಿ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವುದರ ಮೂಲಕ ವಿದ್ಯುತ್ ಸರಬರಾಜು ಮಾಡಲಾಗುವುದೆಂದು ಮತ್ತು ಈ ಯೋಜನೆಯನ್ನು ದಿನಾಂಕ 31.3.2013ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಓದಲಾದ (5)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಇವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಸಮಿತಿಯು ಶಿಫಾರಸ್ಸಿಸಿರುತ್ತದೆ.

ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012, ಬೆಂಗಳೂರು, ದಿನಾಂಕ: 11.10.2012.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆ.ವ್ಯಾ. ಸಾಮರ್ಥ್ಯಕ್ಕೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಿ** ಆದೇಶಿಸಿದೆ.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br><br>**Latitude**: 15°1'55"- 15°8'0" N<br>**Longitude**: 75°08'56"- 75°14'23" E<br>**Ridge peaks:** 701, 714, 682, 717, 713, 698, 733, 722m AMSL. | 79.20 | 0 | 79.20 MW (99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>**Latitude**: 15°0'0"- 15°10'30" N<br>**Longitude**: 75°15'0"- 75°28'19" E<br>**Ridge peaks:** 681, 671, 676, 638, 624, 698, 664, 611, 644, 701, 720, 663, 682, 664, 708, 665, 664m AMSL. | 120.80 | 4 | 124.80 MW (156 x 800 KW) |
| **TOTAL** | | **200** | **4** | **204 MW (255 x 800 KW)** |

| | |
|---|---|
| 1 | **ಮೆ::** ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. |
| 2 | **ಮೆ::** ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ರವರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ. |
| 3 | ಸದರಿ ಯೋಜನೆಯನ್ನು ದಿನಾಂಕ 31.03.2013ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter) |
| 4 | ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. - 2171**

## ತೋಟಗಾರಿಕೆ ಸಚಿವಾಲಯ

**ವಿಷಯ:** ತೋಟಗಾರಿಕೆ ಕ್ಷೇತ್ರಗಳನ್ನು ಖಾಸಗಿ ಸಹಭಾಗಿತ್ವದೊಂದಿಗೆ ಪಿ.ಪಿ.ಪಿ. ಮಾದರಿಯಲ್ಲಿ ಅಭಿವೃದ್ಧಿಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ತೋಇ 269 ತೋಇವಿ 2009 ದಿ.29–11–2010

2) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: KSHDA/TA/06/2008–09ದಿ:04–01–2012

**ಸರ್ಕಾರದ ಆದೇಶ ಸಂಖ್ಯೆ:ತೋಇ 269 ತೋಇವಿ 2009(ಭಾ) ಬೆಂಗಳೂರು, ದಿನಾಂಕ:04–08–2012**

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.1ರ ಸರ್ಕಾರದ ಆದೇಶದಲ್ಲಿ ತೋಟಗಾರಿಕೆ ಇಲಾಖೆಯ ಅಧೀನದಲ್ಲಿ ರಚಿಸಲಾಗಿರುವ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ (KSHDA) ವ್ಯಾಪ್ತಿಯಲ್ಲಿರುವ 13ತೋಟಗಾರಿಕೆ ಕ್ಷೇತ್ರಗಳನ್ನು ಸರ್ಕಾರಿ–ಖಾಸಗಿ ಸಹಭಾಗಿತ್ವದಲ್ಲಿ (PPP ಮಾದರಿಯಲ್ಲಿ) ಅಭಿವೃದ್ಧಿಪಡಿಸಲು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ (KSHDA) ವತಿಯಿಂದ ಯಶಸ್ವಿ ಬಿಡ್ಡುದಾರರೊಂದಿಗೆ ಕೆಲವು ಷರತ್ತು ಮತ್ತು ನಿಬಂಧನೆಗಳೊಂದಿಗೆ 30 ವರ್ಷಗಳ ಅವಧಿಗೆ Project Development and Implementation Agreement ಮಾಡಿಕೊಂಡು ಬಿಡ್ಡುದಾರರಿಗೆ Letter of Award ನೀಡಲು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಗೆ ಅನುಮತಿ ನೀಡಲಾಗಿತ್ತು.

ದಿನಾಂಕ: 27–01–2012ರಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಚಾಲ್ತಿಯಲ್ಲಿದ್ದ ಪಿ.ಪಿ.ಪಿ. ಮಾದರಿಯಲ್ಲಿ ಕೆಲವು ನ್ಯೂನತೆಗಳಿರುವುದನ್ನು ಗಮನಿಸಿ ತೋಟಗಾರಿಕೆ ಕ್ಷೇತ್ರದ ಅಭಿವೃದ್ಧಿ ವಿಷಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಪಿ.ಪಿ.ಪಿ. ಚೌಕಟ್ಟನ್ನು ಪುನರ್ ಪರಿಶೀಲಿಸಿ ಪರ್ಯಾಯ ಮಾದರಿ/ವ್ಯವಸ್ಥೆ ರೂಪಿಸುವುದು ಅಗತ್ಯವಿದೆ ಎಂದು ತೀರ್ಮಾನಿಸಿದ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರ.ಸಂ:2ರಲ್ಲಿನ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಸರ್ಕಾರಿ–ಖಾಸಗಿ ಸಹಭಾಗಿತ್ವದಲ್ಲಿ (PPP) 13ತೋಟಗಾರಿಕೆ ಕ್ಷೇತ್ರಗಳನ್ನು ಅಭಿವೃದ್ಧಿ ಪಡಿಸಲು ಈ ಮಾದರಿಯನ್ನು ಕೈಬಿಟ್ಟು ಪರ್ಯಾಯ ಮಾದರಿ ಅಳವಡಿಸಿ ಅಭಿವೃದ್ಧಿಪಡಿಸಲು ಅನುಮೋದನೆ ನೀಡುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ತೋಟಗಾರಿಕೆ ಇಲಾಖೆಯ ಅಧೀನದಲ್ಲಿ ರಚಿಸಲಾಗಿರುವ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ ವ್ಯಾಪ್ತಿಯಲ್ಲಿರುವ 13 ತೋಟಗಾರಿಕೆ ಕ್ಷೇತ್ರಗಳನ್ನು ಖಾಸಗಿ ಸಹಭಾಗಿತ್ವದ (PPP) ಮಾದರಿಯಲ್ಲಿ ಅಭಿವೃದ್ಧಿಪಡಿಸಲು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ (KSHDA)ಗೆ ಅನುಮತಿ ನೀಡಿ ಹೊರಡಿಸಲಾದ ಸಂಖ್ಯೆ:ತೋಇ 269 ತೋಇವಿ 2011 ದಿ.29–11–2010ರ ಸರ್ಕಾರದ ಆದೇಶವನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ.

**P.R. - 1978**

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಲ್.ಎಸ್.ಕಾಂಬ್ಳೆ, ಸತೋಅ. ತೋಟಗಾರಿಕೆ ಇಲಾಖೆ ಇವರ ವಿರುದ್ಧ ಶಿಸ್ತುಕ್ರಮದ ಬಗ್ಗೆ .

**ಓದಲಾಗಿದೆ:** 1) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ/ಆ/ಸಿ/10-1/17/2004-05ದಿ.12/24-11-2009, 13-07-2010 ಮತ್ತು 26-11-2010

2) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗರವರ ಪತ್ರ ಸಂಖ್ಯೆ: PSC 34 CNS 10 ದಿನಾಂಕ: 25-06-2012

**ಸರ್ಕಾರದ ಆದೇಶ ಸಂ:ಕೃತೋಇ 351 ತೋಸೇಪ 2009 ದಿನಾಂಕ: 07-09-2012**

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:1ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರಗಳಲ್ಲಿ ಶ್ರೀ ಎಲ್.ಎಸ್.ಕಾಂಬ್ಳೆ, ಸಹಾಯಕ ತೋಟಗಾರಿಕೆ ಅಧಿಕಾರಿ ಹಾಗೂ ಪ್ರಭಾರೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ಬಿಜಾಪುರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ 2001-02ನೇ ಸಾಲಿನಲ್ಲಿ ಹನಿ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಮಾರ್ಗಸೂಚಿಯನ್ನು ಅನುಸರಿಸದೆ ಸುಳ್ಳುದಾಖಲೆಗಳನ್ನು ಸೃಷ್ಟಿಸಿ ಫಲಾನುಭವಿಯಾದ ಶ್ರೀಮತಿ ಶಾರದಬಾಯಿಯವರ ಫೋರ್ಜರಿ ಸಹಿಮಾಡಿ ಫಲಾನುಭವಿಗಳಿಗೆ ವಿತರಿಸಬೇಕಾದ ರೂ.15,538/- ಸಹಾಯಧನವನ್ನು ದುರುಪಯೋಗಪಡಿಸಿಕೊಂಡಿರುವ ಬಗ್ಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿದೆ. ಆರೋಪಿತ ಅಧಿಕಾರಿಯು ನಿಗದಿತ ಕಾಲಾವಧಿಯಲ್ಲಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸುತ್ತಾ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ತೋಟಗಾರಿಕೆ ನಿರ್ದೇಶಕರು ದಿ.11-05-2007ರಂದು ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) ಬೆಳಗಾವಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದು, ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ಪೂರ್ಣಗೊಳಿಸಿ, ಆರೋಪಿತ ಅಧಿಕಾರಿಯ ವಿರುದ್ಧದ ಆರೋಪವು ಸಾಬೀತಾಗಿರುವುದಾಗಿ ಅಭಿಪ್ರಾಯ ನೀಡಿದ ಹಿನ್ನಲೆಯಲ್ಲಿ ಈ ಬಗ್ಗೆ ಆರೋಪಿತ ಅಧಿಕಾರಿಗೆ 2ನೇ ಕಾರಣ ಕೇಳಿ ನೋಟೀಸ್‌ನ್ನು ದಿ.05-09-2008 ರಂದು ಜಾರಿಗೊಳಿಸಿದ್ದು, ಈ ನೋಟಿಸಿಗೆ ಆರೋಪಿತ ಅಧಿಕಾರಿಯು ದಿ.10-09-2009ರಂದು ವಿವರಣೆ ನೀಡುತ್ತಾ ಅಂತಿಮ ಅಹವಾಲನ್ನು ನೀಡುತ್ತಾ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ಬಿಜಾಪುರ ಹುದ್ದೆಯು ಖಾಲಿ ಇದ್ದು, ತಾವು ಒಬ್ಬರೇ ಇದ್ದು, ಸಿಬ್ಬಂದಿ/ಅಧಿಕಾರಿಗಳ ಕೊರತೆಯಿದ್ದುದರಿಂದ ಈ ಘಟನೆ ನಡೆದಿರುವುದಾಗಿಯೂ ತಾವು ಯಾವುದೇ ಮೋಸ ಮಾಡಿಲ್ಲವೆಂದು ತಿಳಿಸಿ ಆರೋಪಮುಕ್ತಗೊಳಿಸಲು ಕೋರಿರುತ್ತಾರೆ. ಆದರೆ ಈ ಪ್ರಕರಣದ ಮುಖ್ಯ ಸಾಕ್ಷಿಯಾದ ಶ್ರೀಮತಿ ಶಾರದಬಾಯಿಯವರ ಹೇಳಿಕೆ ಹಾಗೂ ಪೂರಕ ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಆರೋಪಿತ ಅಧಿಕಾರಿಯು ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿರುವುದು ಮತ್ತು ಫೋರ್ಜರಿ ಮಾಡಿರುವುದು ಗಂಭೀರ ಆರೋಪವಾಗಿರುವುದರಿಂದ ಸದರಿಯವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಸೂಕ್ತವಲ್ಲವೆಂದು ಸೇವೆಯಿಂದ ವಜಾಗೊಳಿಸುವಂತೆ ಕೋರಲಾಗಿದೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ನಿಯಮಾನುಸಾರ ಪರಿಶೀಲಿಸಿ, ಶ್ರೀ ಎಲ್.ಎಸ್.ಕಾಂಬ್ಳೆ, ಸಹಾಯಕ ತೋಟಗಾರಿಕೆ ಅಧಿಕಾರಿ ಇವರ ವಿರುದ್ಧದ ದಾಖಲಾತಿ ಫೋರ್ಜರಿ ಮಾಡಿ, ಹಣ ದುರುಪಯೋಗ ಮಾಡಿಕೊಂಡಿರುವ ಆರೋಪವು ಸಾಬೀತಾಗಿರುವುದರಿಂದ ನಿಯಮಾನುಸಾರ ದಂಡನೆ ವಿಧಿಸಲು ಮೇಲೆ ಕ್ರ.ಸಂ:2ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯ ಪಡೆಯಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆ ದೇ ಶ**

ಶ್ರೀ ಎಲ್.ಎಸ್.ಕಾಂಬ್ಳೆ, ಸಹಾಯಕ ತೋಟಗಾರಿಕೆ ಅಧಿಕಾರಿ, ತೋಟಗಾರಿಕೆ ಇಲಾಖೆ ಇವರ ವಿರುದ್ಧದ ಹನಿ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿರುವುದು ಮತ್ತು ಫೋರ್ಜರಿ ಮಾಡಿರುವ ಆರೋಪವು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 8(viii)ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ.

**P.R. - 2081**

## ತೋಟಗಾರಿಕೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ಕೊಳ್ಳೇಗಾಲ ಇಲ್ಲಿಯ ಅವ್ಯವಹಾರದ ಬಗ್ಗೆ ಜಂಟಿ ವಿಚಾರಣೆ ಕುರಿತು.

**ಓದಲಾಗಿದೆ:**
1) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 84 ರೇಸೇವಿ 2007, ದಿನಾಂಕ 01–02–2008
2) ಶ್ರೀ ಕೆ.ಹೆಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು ಇವರ ರಕ್ಷಣಾ ಹೇಳಿಕೆ ದಿನಾಂಕ 26–02–2008
3) ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ. ಮರಿಬಸಪ್ಪ, ರೇಷ್ಮೆ ಪ್ರವರ್ತಕರು ಮತ್ತು ಶ್ರೀ ಎಸ್.ಮಹದೇವ ಪ್ರಸಾದ್ ಇವರುಗಳ ರಕ್ಷಣಾ ಹೇಳಿಕೆ ದಿನಾಂಕ 21–02–2008
4) ಸರ್ಕಾರದ ಆದೇಶ ಸಂಖ್ಯೆ: ವಾಕೈ 84 ರೇಸೇವಿ 2007, ದಿನಾಂಕ 29–12–2008
5) ವಿಚಾರಣಾಧಿಕಾರಿಗಳ ಪತ್ರ ಸಂಖ್ಯೆ: ಜಂನಿಮೈ/ಸಿ1/ಇವಿ/127/2008–09, ದಿನಾಂಕ 06–08–2011
6) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ(3)ಶಿಸ್ತು:8:2007–08, ದಿನಾಂಕ: 14–06–2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 01–02–2008ರ ಕಾರಣ ಕೇಳುವ ನೋಟೀಸ್‌ನಲ್ಲಿ ಮಾನ್ಯ ರೇಷ್ಮೆ ಸಚಿವರು ಕೊಳ್ಳೇಗಾಲ ರೇಷ್ಮೆ ಗೂಡಿನ ಮಾರುಕಟ್ಟೆಗೆ ದಿನಾಂಕ 15–05–2007 ರಂದು ಅನಿರೀಕ್ಷಿತವಾಗಿ ಭೇಟಿ ನೀಡಿದ ಮಾರುಕಟ್ಟೆಯ ದೈನಂದಿನ ಚಟುವಟಿಕೆಗಳನ್ನು ಪರಿಶೀಲಿಸಿದಾಗ ಮಾರುಕಟ್ಟೆ ಘಟಕ–1ರ ಹಣ ಸ್ವೀಕರಿಸುವ ಕ್ಯಾಷ್ ಕೌಂಟರ್‌ನಲ್ಲಿ ಭೌತಿಕವಾಗಿ ಶೇಖರಿಸಲಾಗಿದ್ದು ರೂ.1,65,000–00 ಕ್ಕಿಂತಲೂ ಹೆಚ್ಚು ಹಣ ಶೇಖರಿಸಿದ್ದ ಬಗ್ಗೆ ಆಕ್ಷೇಪವನ್ನು ಸೂಚಿಸಿ, ಅವ್ಯವಹಾರಕ್ಕೆ ಕಾರಣಕರ್ತರಾಗಿರುವುದರಿಂದ ಶ್ರೀ ಕೆ.ಹೆಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು, ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ.ಮರಿಬಸಪ್ಪ, ರೇಷ್ಮೆ ಪ್ರವರ್ತಕ ಮತ್ತು ಶ್ರೀ ಎಸ್.ಮಹದೇವ ಪ್ರಸಾದ್, (ಸಂ) ರೇಷ್ಮೆ ಪ್ರವರ್ತಕ ಇವರುಗಳಿಗೆ ಕಾರಣ ಕೇಳುವ ನೋಟೀಸ್‌ನೊಂದಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2 ಮತ್ತು 3)ರ ದಿನಾಂಕ 21–02–2008 ಮತ್ತು 26–02–2008ರ ರಕ್ಷಣಾ ಹೇಳಿಕೆಯಲ್ಲಿ ಅವರುಗಳ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿ ಅವರುಗಳ ಮೇಲಿನ ಆರೋಪಗಳನ್ನು ಕೈ ಬಿಟ್ಟು ದೋಷಮುಕ್ತರನ್ನಾಗಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 29–12–2008 ರಲ್ಲಿ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ ಇಲ್ಲಿಯ ಘಟಕ–1ರ ಕ್ಯಾಷ್ ಕೌಂಟರ್‌ನಲ್ಲಿ ಭೌತಿಕವಾಗಿ ಶೇಖರಿಸಲಾಗಿದ್ದು ರೂ.1,65,000–00 ಕ್ಕಿಂತಲೂ ಹೆಚ್ಚು ಹಣ ಶೇಖರಿಸಿದ್ದ ಬಗ್ಗೆ ನಡೆಯಿತೆನ್ನಲಾದ ಅವ್ಯವಹಾರ ಕುರಿತಂತೆ ಶ್ರೀ ಕೆ.ಹೆಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು, ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ.ಮರಿಬಸಪ್ಪ, ರೇಷ್ಮೆ ಪ್ರವರ್ತಕ ಮತ್ತು ಶ್ರೀ ಎಸ್.ಮಹದೇವ ಪ್ರಸಾದ್, (ಸಂ) ರೇಷ್ಮೆ ಪ್ರವರ್ತಕ ಇವರುಗಳ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13 ಪ್ರಕಾರ ಜಂಟಿ ವಿಚಾರಣೆ ನಡೆಸಲು ಆದೇಶಿಸಿ, ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ 06–08–2011ರ ಪತ್ರದಲ್ಲಿ ಸರ್ಕಾರಕ್ಕೆ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ ಇಲ್ಲಿಯ ಘಟಕ–1ರ ಕ್ಯಾಷ್ ಕೌಂಟರ್‌ನಲ್ಲಿ ಭೌತಿಕವಾಗಿ ಶೇಖರಿಸಲಾಗಿದ್ದು ರೂ.1,65,000–00 ಕ್ಕಿಂತಲೂ ಹೆಚ್ಚು ಹಣ ಶೇಖರಿಸಿದ್ದ ಬಗ್ಗೆ ನಡೆಯಿತೆನ್ನಲಾದ ಅವ್ಯವಹಾರದ ಬಗ್ಗೆ ವಿಚಾರಣೆ ಮಾಡಿ ಈ ಕೆಳಕಂಡಂತೆ ವರದಿಯನ್ನು ನೀಡಿರುತ್ತಾರೆ:

> "ರೀಲರ್‌ಗಳಿಂದ ಪಡೆಯುವ ಮುಂಗಡಕ್ಕೆ ಸಂಬಂಧಪಟ್ಟಂತೆ ಸರ್ಕಾರದ ರಶೀತಿಗಳನ್ನು ಹಾಕುತ್ತಿಲ್ಲ. ಜವಾಬ್ದಾರಿಯುತವಾಗಿ, ಗೂಡು ಮಾರಾಟ ಮಾಡಿದ ರೇಷ್ಮೆ ಬೆಳೆಗಾರರಿಗೆ ಆಯಾ ದಿನವೇ ಗೂಡಿನ ಮೌಲ್ಯ ಪಾವತಿಯಾಗುತ್ತಿದ್ದು, ರೀಲರ್‌ಗಳಿಂದಾಗಲೀ, ರೇಷ್ಮೆ ಬೆಳೆಗಾರರಿಂದಾಗಲೀ, ಯಾವುದೇ ದೂರುಗಳು ಇಲ್ಲದೆ ಇರುವುದರಿಂದ, ಮತ್ತು ಈ ಹಣ ಸರ್ಕಾರಿ ಹಣವಾಗಿಲ್ಲವಾದ ಕಾರಣ ಪಾರದರ್ಶಕತೆಯನ್ನು ಕಾಯ್ದುಕೊಂಡಿಲ್ಲ ಎನ್ನುವುದು ಒಪ್ಪಲಾಗದು. ಈ ಮಾರುಕಟ್ಟೆಯಲ್ಲಿ 3 ಘಟಕಗಳಿದ್ದು, 2 ಘಟಕಗಳಲ್ಲಿ ಹಣ ಸ್ವೀಕರಿಸುವ ಹಾಗೂ ಸಂದಾಯ ಮಾಡುವ ವ್ಯವಸ್ಥೆ ನಡೆಯುತ್ತಿದ್ದು, ಇದಕ್ಕೆ ಸಂಬಂಧಪಟ್ಟಂತೆ ನಿರ್ವಹಿಸಿರುವ ರಿಜಿಸ್ಟರ್‌ಗಳಲ್ಲಿ ಪ್ರತಿ ರೀಲರ್ ಜಮಾ ಮಾಡಿದ ಮುಂಗಡ ಗೂಡು ಖರೀದಿಸಿದ ನಂತರ ಬಾಕಿ ಉಳಿದ ಹಣ ಇವುಗಳ ಬಗ್ಗೆ ನಮೂದಿಸಿದ್ದು, ಘಟಕ–1ರ ಕ್ಯಾಷ್ ಕೌಂಟರ್‌ನಲ್ಲಿ ದಿನಾಂಕ 15–05–2007ರಂದು ಪರಿವೀಕ್ಷಣೆ ನಡೆಸಿದಾಗ ಹಣ ಎಷ್ಟಿತ್ತು ಎಂಬ ಬಗ್ಗೆ ಭೌತಿಕವಾಗಿ ಪರಿಶೀಲಿಸಿ ಖಚಿತಪಡದೆ ಇದ್ದರೂ ಸಹ ಇದ್ದ ಹಣ ರೀಲರಗಳ ಮುಂಗಡದಲ್ಲಿ ಬಾಕಿ ಉಳಿದಿದ್ದ ಹಾಗೂ ಸದರಿ ದಿನಾಂಕದಂದು ವಸೂಲಾತಿಯಾದ ಮಾರುಕಟ್ಟೆಯ ಶುಲ್ಕದ ಬಾಬ್ತಿನ ಹಣವೆಂದು ದೃಢಪಡುತ್ತಿದ್ದು, ಈ ಸಂಬಂಧ ಯಾವುದೇ ಲೋಪ ಆಪಾದಿತರುಗಳಿಂದ ಆಗಿಲ್ಲವೆಂಬುದು ದೃಢಪಡುತ್ತದೆ. ಮಂಡನಾಧಿಕಾರಿಗಳ ವಾದವನ್ನು ಆಪಾದಿತರುಗಳು ಸಲ್ಲಿಸಲಾದ ಪ್ರತಿವಾದಗಳೊಂದಿಗೆ ವಿಮರ್ಶಿಸಿದ್ದು, ಶಿಸ್ತು ಪ್ರಾಧಿಕಾರ ಆಪಾದಿತರುಗಳ ವಿರುದ್ಧ ಮಾಡಲಾದ ಆರೋಪವು ರುಜುವಾತಾಗುವುದಿಲ್ಲ"

ಮೇಲೆ ಓದಲಾದ ಕ್ರಮ ಸಂಖ್ಯೆ (6) ದಿನಾಂಕ 14–06–2012ರ ಪತ್ರದಲ್ಲಿ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ ಇಲ್ಲಿಯ ಘಟಕ–1ರ ಕ್ಯಾಷ್ ಕೌಂಟರ್‌ನಲ್ಲಿ ಭೌತಿಕವಾಗಿ ಶೇಖರಿಸಲಾಗಿದ್ದು ರೂ.1,65,000–00 ಕ್ಕಿಂತಲೂ ಹೆಚ್ಚು ಹಣ ಶೇಖರಿಸಿದ್ದ ಬಗ್ಗೆ ನಡೆಯಿತೆನ್ನಲಾದ ಅವ್ಯವಹಾರ ಕುರಿತಂತೆ ಶ್ರೀ ಕೆ.ಹೆಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು, ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ.ಮರಿಬಸಪ್ಪ, ರೇಷ್ಮೆ ಪ್ರವರ್ತಕ ಮತ್ತು ಶ್ರೀ ಎಸ್.ಮಹದೇವ ಪ್ರಸಾದ್, (ಸಂ) ರೇಷ್ಮೆ ಪ್ರವರ್ತಕ ಇವರುಗಳ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳ ಬಗ್ಗೆ ನಡೆಸಿದ ಇಲಾಖಾ ವಿಚಾರಣಾ ವರದಿಯನ್ನು ಪರಿಶೀಲಿಸಿ, ಸದರಿ ಅಧಿಕಾರಿ ಮತ್ತು ಸಿಬ್ಬಂದಿಗಳ ವಿರುದ್ಧ ಮಾಡಲಾದ

ಆರೋಪವು ರುಜುವಾತಾಗಿಲ್ಲದಿರುವುದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಅಂಗೀಕರಿಸಿ ಅಂತಿಮ ಆದೇಶ ಹೊರಡಿಸಬಹುದೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಅಭಿಪ್ರಾಯ ನೀಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ ಇಲ್ಲಿಯ ಘಟಕ–1ರ ಕ್ಯಾಷ್ ಕೌಂಟರ್‌ನಲ್ಲಿ ಭೌತಿಕವಾಗಿ ಶೇಖರಿಸಲಾಗಿದ್ದು ರೂ.1,65,000–00 ಕ್ಕಿಂತಲೂ ಹೆಚ್ಚು ಹಣ ಶೇಖರಿಸಿದ್ದ ಬಗ್ಗೆ ನಡೆಯಿತೆನ್ನಲಾದ ಅವ್ಯವಹಾರ ಕುರಿತಂತೆ ಆರೋಪಿತರುಗಳ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳ ಬಗ್ಗೆ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಆರೋಪಗಳು ರುಜುವಾತಾಗಿಲ್ಲವೆಂದು ವರದಿ ನೀಡಿರುವ ಮೇರೆಗೆ ಹಾಗೂ ಆರೋಪಗಳು ಸಾಬೀತಾಗಿಲ್ಲವೆಂದು ಮತ್ತು ಆರೋಪಿತರುಗಳಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ನೀಡಿರುವ ಅಭಿಪ್ರಾಯದ ಮೇರೆಗೆ ಶ್ರೀ ಕೆ.ಹಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು, ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ.ಮರಿಬಸಪ್ಪ, ರೇಷ್ಮೆ ಪ್ರವರ್ತಕ ಮತ್ತು ಶ್ರೀ ಎಸ್.ಮಹದೇವ ಪ್ರಸಾದ್, (ಸಂ) ರೇಷ್ಮೆ ಪ್ರವರ್ತಕ ಇವರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 210 ರೇಸೇವಿ 2012, ಬೆಂಗಳೂರು, ದಿನಾಂಕ: 16–08–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ ಇಲ್ಲಿಯ ಘಟಕ–1ರ ಕ್ಯಾಷ್ ಕೌಂಟರ್‌ನಲ್ಲಿ ಭೌತಿಕವಾಗಿ ಶೇಖರಿಸಲಾಗಿದ್ದು ರೂ.1,65,000–00 ಕ್ಕಿಂತಲೂ ಹೆಚ್ಚು ಹಣ ಶೇಖರಿಸಿದ್ದ ಬಗ್ಗೆ ನಡೆಯಿತೆನ್ನಲಾದ ಅವ್ಯವಹಾರ ಕುರಿತಂತೆ ಆರೋಪಿತರುಗಳ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳ ಬಗ್ಗೆ ವಿಚಾರಣಾಧಿಕಾರಿ ಹಾಗೂ ರೇಷ್ಮೆ ಜಂಟಿ ನಿರ್ದೇಶಕರು, ಮೈಸೂರುರವರು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಶ್ರೀ ಕೆ.ಹೆಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು, ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ.ಮರಿಬಸಪ್ಪ, ರೇಷ್ಮೆ ಪ್ರವರ್ತಕ ಮತ್ತು ಶ್ರೀ ಎಸ್.ಮಹದೇವ ಪ್ರಸಾದ್, (ಸಂ) ರೇಷ್ಮೆ ಪ್ರವರ್ತಕ ಇವರುಗಳ ಮೇಲಿನ ಆರೋಪಗಳು ರುಜುವಾತಾಗಿಲ್ಲವೆಂದು ಮತ್ತು ಆರೋಪಿತರುಗಳಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ನೀಡಿರುವ ವರದಿಗಳನ್ನು ಸರ್ಕಾರವು ಒಪ್ಪಿಕೊಂಡು ಶ್ರೀ ಕೆ.ಹಚ್.ಪೃಥ್ವೀರಾಜ್, ರೇಷ್ಮೆ ಉಪ ನಿರ್ದೇಶಕರು, ಶ್ರೀ ಹೆಚ್.ಬಿ.ಬೋರಯ್ಯ, ರೇಷ್ಮೆ ವಿಸ್ತರಣಾಧಿಕಾರಿ, ಶ್ರೀ ಹೆಚ್.ಪಿ.ಮರಿಬಸಪ್ಪ, ರೇಷ್ಮೆ ಪ್ರವರ್ತಕ ಮತ್ತು ಶ್ರೀ ಎಸ್.ಮಹದೇವ ಪ್ರಸಾದ್, (ಸಂ) ರೇಷ್ಮೆ ಪ್ರವರ್ತಕ ಇವರುಗಳನ್ನು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಬಿ.ವಿಜಯಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ (ರೇಷ್ಮೆ)

**P.R. - 2173**

## ತೋಟಗಾರಿಕೆ ಸಚಿವಾಲಯ

**ವಿಷಯ:** ರಾಯಚೂರು ಜಿಲ್ಲೆಯ ರಾಯಚೂರು ಗೂಡಿನ ನಂತರದ ಚಟುವಟಿಕೆ, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿಯನ್ನು ಲಿಂಗಸುಗೂರ ತಾಲೂಕಿಗೆ ಸ್ಥಳಾಂತರಿಸುವ ಬಗ್ಗೆ

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ:ಸಿ1(1)/ರೇಸನಿ/ಹುದ್ದೆ/ಸ್ಥಳಾ/24/2012–13, ದಿನಾಂಕ 14–06–2012.

**<u>ಪ್ರಸ್ತಾವನೆ:</u>**

ಮೇಲೆ ಓದಲಾದ ದಿನಾಂಕ 14–06–2012ರ ಪತ್ರದಲ್ಲಿ ರಾಯಚೂರು ಜಿಲ್ಲೆಯಲ್ಲಿ 5 ತಾಲೂಕುಗಳಿದ್ದು, 5 ತಾಲೂಕುಗಳ ಹಿಪ್ಪುನೇರಳೆ ಒಟ್ಟು ವಿಸ್ತೀರ್ಣ 341.08 ಹೆಕ್ಟೇರ್‌ಗಳಾಗಿದ್ದು ಹಾಗೂ ರೇಷ್ಮೆ ಬೆಳೆಗಾರರ ಸಂಖ್ಯೆ 287 ಆಗಿರುತ್ತದೆ. ಈ ಜಿಲ್ಲೆಯಲ್ಲಿ ರಾಯಚೂರಿನಲ್ಲಿ ಗೂಡಿನ ನಂತರದ ಚಟುವಟಿಕೆಯ ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿಯು ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲೆಯಲ್ಲಿ ಯಾವುದೇ ವಿಧವಾದ ನೂಲು ಬಿಚ್ಚಾಣಿಕೆ ಚಟುವಟಿಕೆಗಳು ಇರುವುದಿಲ್ಲ. ದೇವದುರ್ಗ ಮತ್ತು ಸಿಂಧನೂರು ತಾಂತ್ರಿಕ ಸೇವಾ ಕೇಂದ್ರಗಳಲ್ಲಿ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆ ಖಾಲಿಯಿರುವುದರಿಂದ ಗೂಡಿನ ನಂತರದ ಚಟುವಟಿಕೆ, ರೇಷ್ಮೆ ಸಹಾಯಕ ನಿರ್ದೇಶಕರು ಸದರಿ ಸಂಸ್ಥೆಗಳ ಪ್ರಭಾರವನ್ನು ನಿರ್ವಹಿಸುತ್ತಿರುತ್ತಾರೆ. ರಾಯಚೂರು ಜಿಲ್ಲೆಯಲ್ಲಿಯೇ ಲಿಂಗಸುಗೂರ ತಾಲ್ಲೂಕಿನಲ್ಲಿ ಅತೀ ಹೆಚ್ಚು ಅಂದರೆ 235.48 ಹೆಕ್ಟೇರ್‌ಗಳಲ್ಲಿ ರೇಷ್ಮೆ ಕೃಷಿ ಚಟುವಟಿಕೆ ಇದ್ದು ತಾಂತ್ರಿಕ ಸೇವಾ ಕೇಂದ್ರದಲ್ಲಿ ರೇಷ್ಮೆ ವಿಸ್ತರಣಾಧಿಕಾರಿ ಹುದ್ದೆ ಖಾಲಿಯಿರುವುದರಿಂದ ಅಲ್ಲಿ ಒಬ್ಬ ರೇಷ್ಮೆ ನಿರೀಕ್ಷಕರಿಂದ ನಿರ್ವಹಿಸಲ್ಪಡುತ್ತಿದೆ. ಈ ತಾಲ್ಲೂಕಿಗೆ ಒಂದು ರೇಷ್ಮೆ ಸಹಾಯಕ ನಿರ್ದೇಶಕರ ಹುದ್ದೆಯು ಅವಶ್ಯಕವಾಗಿ ಬೇಕಾಗಿರುವುದರಿಂದ ರಾಯಚೂರು ಗೂಡಿನ ನಂತರದ ಚಟುವಟಿಕೆಯ ರೇಷ್ಮೆ ಸಹಾಯಕ ನಿರ್ದೇಶಕರ ಹುದ್ದೆಯನ್ನು ಕೇಂದ್ರ ಸ್ಥಾನ ರಾಯಚೂರಿನಿಂದ ಲಿಂಗಸುಗೂರಿಗೆ ಸ್ಥಳಾಂತರಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು ರಾಯಚೂರು ಗೂಡಿನ ನಂತರದ ಚಟುವಟಿಕೆಯ ರೇಷ್ಮೆ ಸಹಾಯಕ ನಿರ್ದೇಶಕರ ಹುದ್ದೆಯನ್ನು ಕೇಂದ್ರ ಸ್ಥಾನ ರಾಯಚೂರಿನಿಂದ ಹೆಚ್ಚಿನ ಕಾರ್ಯ ಒತ್ತಡ ಇರುವ ಲಿಂಗಸುಗೂರು ತಾಲ್ಲೂಕಿಗೆ ಸ್ಥಳಾಂತರಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ

**ಸರ್ಕಾರದ ಆದೇಶ ಸಂ: ತೋಇ 132 ರೇಕೃವಿ 2012, ಬೆಂಗಳೂರು, ದಿನಾಂಕ: 04–08–2012**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ರಾಯಚೂರು ಗೂಡಿನ ನಂತರದ ಚಟುವಟಿಕೆಯ ರೇಷ್ಮೆ ಸಹಾಯಕ ನಿರ್ದೇಶಕರ ಹುದ್ದೆಯನ್ನು ಕೇಂದ್ರ ಸ್ಥಾನ ರಾಯಚೂರಿನಿಂದ ಹೆಚ್ಚಿನ ಕಾರ್ಯ ಒತ್ತಡ ಇರುವ ಲಿಂಗಸುಗೂರು ತಾಲ್ಲೂಕಿಗೆ ಸ್ಥಳಾಂತರಿಸಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 335 ವೆಚ್ಚ–4/2012, ದಿನಾಂಕ: 20–07–2012ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಬಿ.ವಿಜಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ (ರೇಷ್ಮೆ)

**P.R. - 2099**

## ತೋಟಗಾರಿಕೆ ಸಚಿವಾಲಯ

**ವಿಷಯ:** ಉತ್ತರಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕು, ಶಿರಸಿಯಲ್ಲಿರುವ ರೇಷ್ಮೆ ಇಲಾಖೆಯ ಜಮೀನನ್ನು ತೋಟಗಾರಿಕೆ ಕಾಲೇಜಿನ ಉಪಯೋಗಕ್ಕಾಗಿ ಹೆಚ್ಚುವರಿ ಕಟ್ಟಡ ಒದಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ವಾಕೈ 14 ರೇಯೋವಿ 2010, ದಿನಾಂಕ: 29–5–2010.
2. ಸರ್ಕಾರಿ ಆದೇಶ ಸಂಖ್ಯೆ: ವಾಕೈ 14 ರೇಯೋವಿ 2010, ದಿನಾಂಕ: 16–6–2011.
3. ಡೀನ್, ತೋಟಗಾರಿಕಾ ಮಹಾವಿದ್ಯಾಲಯ, ಶಿರಸಿ ಇವರ ಪತ್ರ ಸಂಖ್ಯೆ: ಡೀನ್/ತೋಮಶಿ/ರೇ.ಕಟ್ಟಡ/254/ 2011–12, ದಿನಾಂಕ: 13–1–2012.
4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ರೇನಿ/ರೇಉನಿ/ತಾಂ2/ಗೂಮಾ/ಶಿರಸಿ/ಕಟ್ಟಡ1–12, ದಿನಾಂಕ: 4–6–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕಿನ ಶಿರಸಿ ನಗರದಲ್ಲಿರುವ ರೇಷ್ಮೆ ಇಲಾಖೆಯ ಕಟ್ಟಡಗಳನ್ನು ಹಾಗೂ 20 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಅಥವಾ ಮುಂದಿನ ದಿನಗಳಲ್ಲಿ ರೇಷ್ಮೆ ಇಲಾಖೆಗೆ ಅವಶ್ಯಕವೆನಿಸಿದಾಗ ಬಿಟ್ಟುಕೊಡಬೇಕೆಂಬ ಷರತ್ತಿನೊಂದಿಗೆ ತೋಟಗಾರಿಕೆ ಮಹಾವಿದ್ಯಾಲಯ, ಶಿರಸಿ ಇವರಿಗೆ ನೀಡಲಾಗಿತ್ತು.

ಡೀನ್, ತೋಟಗಾರಿಕೆ ಮಹಾವಿದ್ಯಾಲಯ, ಶಿರಸಿ ಇವರು ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಶಿರಸಿಯಲ್ಲಿ ತೋಟಗಾರಿಕೆ ಮಹಾವಿದ್ಯಾಲಯವನ್ನು ರೇಷ್ಮೆ ಇಲಾಖೆಗೆ ಸೇರಿದ ಜಮೀನು ಹಾಗೂ ಕಟ್ಟಡದಲ್ಲಿ ಪ್ರಾರಂಭಿಸಲಾಗಿದ್ದು, ಈ ಕಟ್ಟಡಗಳಲ್ಲಿ ಆಡಳಿತ ಕಟ್ಟಡ ತರಗತಿಗಳು ಹಾಗೂ ವಿದ್ಯಾರ್ಥಿಗಳ ವಸತಿ ನಿಲಯಗಳಾಗಿ ಪರಿವರ್ತಿಸಿ, ಕಾರ್ಯ ಪ್ರಾರಂಭಿಸಲಾಗಿದ್ದು, ಈಗಾಗಲೇ 2ನೇ ವರ್ಷದ ತರಗತಿಗಳು ಮುಗಿಯುವ ಹಂತದಲ್ಲಿದ್ದು, ಒಟ್ಟು 69 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದು, ಜೂನ್–12ರ ಹೊತ್ತಿಗೆ ಮತ್ತೊಂದು ಶೈಕ್ಷಣಿಕ ಸಾಲಿನಲ್ಲಿ ಸುಮಾರು 40 ವಿದ್ಯಾರ್ಥಿಗಳು ಪ್ರವೇಶ ಪಡೆಯಲಿದ್ದು, ಇದಕ್ಕಾಗಿ ಪ್ರಯೋಗಾಲಯ ಹಾಗೂ ಗ್ರಂಥಾಲಯದ ಅವಶ್ಯಕತೆ ಇದ್ದು, ಸ್ಥಳದ ಅಭಾವದ ಕಾರಣ ಈ ಸೌಲಭ್ಯಗಳನ್ನು ಒದಗಿಸದ ಕಾರಣ ವಿದ್ಯಾರ್ಥಿಗಳು ಉತ್ತಮ ಜ್ಞಾನದ ಗಳಿಕೆಯಿಂದ ವಂಚಿತರಾಗುತ್ತಿದ್ದಾರೆ. ತೋಟಗಾರಿಕೆ ಮಹಾವಿದ್ಯಾಲಯದ ಸ್ವಂತ ಕಟ್ಟಡ ನಿರ್ಮಾಣಗೊಳ್ಳಲು ಕನಿಷ್ಟ ಒಂದು ವರ್ಷ ಬೇಕಾಗಲಿದ್ದು, ಅಲ್ಲಿಯವರೆಗೆ ತೋಟಗಾರಿಕಾ ಮಹಾವಿದ್ಯಾಲಯದ ಆಡಳಿತ ಕಟ್ಟಡದ ಪಕ್ಕದಲ್ಲಿ ರೇಷ್ಮೆ ಇಲಾಖೆಗೆ ಸೇರಿದ, ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆ ಕಟ್ಟಡವಿದ್ದು, ಇದರಲ್ಲಿ ಕೇವಲ 2 ಕೊಠಡಿಗಳನ್ನು ಮಾತ್ರ, ರೇಷ್ಮೆ ಇಲಾಖೆಯು ಉಪಯೋಗಿಸುತ್ತಿರುವುದರಿಂದ ಇದರಲ್ಲಿರುವ ಕಛೇರಿಗಳನ್ನು ಉಳಿದಿರುವ ಇತರೆ ಕಟ್ಟಡಗಳಿಗೆ ವರ್ಗಾಯಿಸಿ, ಶಿರಸಿಯಲ್ಲಿನ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆಯ ಕಟ್ಟಡವನ್ನು ತೋಟಗಾರಿಕೆ ಮಹಾವಿದ್ಯಾಲಯಕ್ಕೆ ಹಸ್ತಾಂತರ ಮಾಡಿಕೊಡುವಂತೆ ಮಾನ್ಯ ತೋಟಗಾರಿಕೆ ಮತ್ತು ಸಕ್ಕರೆ ಸಚಿವರಿಗೆ ಪತ್ರ ಬರೆದಿರುತ್ತಾರೆ.

ಮೇಲೆ ಓದಲಾದ ಆಯುಕ್ತರು ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ ಕಟ್ಟಡದಲ್ಲಿ ರೇಷ್ಮೆ ಇಲಾಖೆಯು ಅವಶ್ಯವಿರುವ ಸ್ಥಳಕ್ಕೆ ವಿಭಜಕಗಳನ್ನು (partition) ಅಳವಡಿಸಿ, 2 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಇಲಾಖೆಯು ಅವಶ್ಯವೆನಿಸಿದಾಗ ಬಿಟ್ಟುಕೊಡುವ ಹಾಗೂ ವಿಭಜಕಗಳನ್ನು ಅಳವಡಿಸುವ ವೆಚ್ಚವನ್ನು ತೋಟಗಾರಿಕೆ ಮಹಾವಿದ್ಯಾಲಯ, ಶಿರಸಿ ರವರು ಭರಿಸುವ ಷರತ್ತಿನೊಂದಿಗೆ ಹಸ್ತಾಂತರಿಸಲು ಸಹಮತಿ ವ್ಯಕ್ತಪಡಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 08 ರೇಯೋವಿ 2011, ಬೆಂಗಳೂರು, ದಿ: 18–7–2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ಶಿರಸಿಯಲ್ಲಿರುವ ಕಟ್ಟಡವನ್ನು 2 ವರ್ಷಗಳ ಕಾಲ ತಾತ್ಕಾಲಿಕವಾಗಿ ತೋಟಗಾರಿಕಾ ಮಹಾವಿದ್ಯಾಲಯ, ಶಿರಸಿ ಇವರಿಗೆ ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆಯ ಕಟ್ಟಡದಲ್ಲಿ ರೇಷ್ಮೆ ಇಲಾಖೆಗೆ ಅವಶ್ಯವಿರುವ ಸ್ಥಳಕ್ಕೆ ವಿಭಜಕವನ್ನು ಅಳವಡಿಸಿ, ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಇಲಾಖೆಯು ಅವಶ್ಯಕವೆನಿಸಿದಾಗ ಬಿಟ್ಟುಕೊಡುವ ಹಾಗೂ ವಿಭಜಕಗಳನ್ನು (partition) ಅಳವಡಿಸುವ ವೆಚ್ಚವನ್ನು ತೋಟಗಾರಿಕೆ ಮಹಾವಿದ್ಯಾಲಯ, ಶಿರಸಿರವರು ಭರಿಸುವ ಷರತ್ತಿನೊಂದಿಗೆ ಹಸ್ತಾಂತರಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ಚಂದ್ರಶೇಖರ್**

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ),

**P.R. - 2007**